

ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 485 (576) |
| ಸದಸ್ಯರ ಹೆಸರು | : | ಶ್ರೀ ಎಸ್ ಎಲ್ ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 10-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಸ್ಕರಣೆ ನಿಯಮ ಪಾಲನೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ವಸ್ತು ನಿರ್ವಹಣೆ ನಿಯಮ 2016ನ್ನು ಅನುಷ್ಠಾನಗೊಳಸುವ ಬಗ್ಗೆ ಕ್ರಮ ಕೈಗೊಳ್ಳಲಾಗಿದ್ದು ಅನುಷ್ಠಾನ ಪ್ರಕ್ರಿಯೆಯು ವಿವಿಧ ಹಂತಗಳಲ್ಲಿ ಇರುತ್ತದೆ. |
| ಆ) | ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಪ್ರತಿ ನಿತ್ಯ ಎಷ್ಟು ಘನತ್ಯಾಜ್ಯ ಸಂಗ್ರಹವಾಗುತ್ತಿದೆ ಹಾಗೂ ಅದನ್ನು ವೈಜ್ಞಾನಿಕ ರೀತಿಯಲ್ಲಿ ಪುನರ್ ಬಳಕೆ ಮಾಡುವ ಮತ್ತು ವಿಲೇವಾರಿ ಮಾಡುವ ಯೋಜನೆಯ ವಿವರ ನೀಡುವುದು (ಜಿಲ್ಲಾ ವಾರು ಮಾಹಿತಿ ನೀಡುವುದು) | • ಮಹಾನಗರಪಾಲಿಕೆಗಳು ಹಾಗು ಇತರೆ ನಗರಸ್ಥಳೀಯ ಸಂಸ್ಥೆಗಳು ಸೇರಿದಂತೆ 6885 ಟನ್ ತ್ಯಾಜ್ಯ (ಬಿ.ಬಿ.ಎಂ.ಪಿ ಹೊರತುಪಡಿಸಿ) ಸಂಗ್ರಹಣೆಯಾಗುತ್ತಿದೆ.<br>• ಸ್ವಚ್ಛ ಭಾರತ ಮಿಷನ್ ಅಡಿ ಯೋಜನೆಯಡಿ 218 ನಗರಸ್ಥಳೀಯ ಸಂಸ್ಥೆಗಳಲ್ಲಿ ಸಮಗ್ರ ಘನತ್ಯಾಜ್ಯ ನಿರ್ವಹಣೆಗೆ ಯೋಜನಾವರದಿಗಳನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆ ನೀಡಲಾಗಿದೆ.<br>• ವಿಸ್ತೃತ ಯೋಜನಾವರದಿಯ ರೀತ್ಯಾ ನಗರಸ್ಥಳೀಯ ಸಂಸ್ಥೆಗಳು ಹಸಿ ಹಾಗು ಒಣ ತ್ಯಾಜ್ಯವನ್ನು ಮೂಲದಲ್ಲಿಯೇ ಬೇರ್ಪಡಿಸಿ, ಪ್ರತ್ಯೇಕವಾಗಿ ಸಂಗ್ರಹಿಸಲಾದ ಹಸಿ ತ್ಯಾಜ್ಯವನ್ನು composting ತಂತ್ರಜ್ಞಾನ ಬಳಸಿ ಗೊಬ್ಬರವಾಗಿ ಪರಿವರ್ತಿಸಲು ಕ್ರಮವಹಿಸಿದೆ.<br>• ಪ್ರತ್ಯೇಕವಾಗಿ ಸಂಗ್ರಹಿಸಲಾದ ಒಣ ಕಸದಲ್ಲಿರುವ ಪುನರ್ಬಳಕೆ ಯೋಗ್ಯವಾದ ವಸ್ತುಗಳನ್ನು recycler ಗಳಿಗೆ ನೀಡಲು ಹಾಗು ಮರುಬಳಕೆಯಾಗದ ಮತ್ತು ದಹನಯೋಗ್ಯ ತ್ಯಾಜ್ಯವನ್ನು ಹತ್ತಿರದ ಸಿಮೆಂಟ್ ಕಾರ್ಖಾನೆಗಳಿಗೆ ಪರ್ಯಾಯ ಇಂಧನವಾಗಿ ಬಳಸುವಂತೆ ಸೂಚನೆ ನೀಡಲಾಗಿರುತ್ತದೆ.<br>• ತ್ಯಾಜ್ಯ ಸಂಸ್ಕರಣೆ ಜಾಗದಲ್ಲಿ ಬಹಳ ವರ್ಷಗಳಿಂದ ವಿಲೇವಾರಿ ಮಾಡದೆ ಉಳಿದಿರುವ ಹಳೆಯ ತ್ಯಾಜ್ಯವನ್ನು (Legacy waste) ನ್ನು ಹೊರತೆಗೆದು windrow ಗಳಾಗಿ ಹರಡಿ ಸಂಸ್ಕರಿಸಿದ ನಂತರ ಸದರಿ ತ್ಯಾಜ್ಯವನ್ನು rotary screening machine ಮೂಲಕ ಬೇರ್ಪಡಿಸಿ, ದಹನಯೋಗ್ಯ ತ್ಯಾಜ್ಯವನ್ನು ಪರ್ಯಾಯ ಇಂದನವಾಗಿ ಉಪಯೋಗಿಸಲು ಹಾಗು ಉಳಿಕೆ ನಿಸ್ಸತ್ವ |

| | | |
|---|---|---|
| | | ತ್ಯಾಜ್ಯವನ್ನು ಸ್ಯಾನಿಟರಿ ಲ್ಯಾಂಡ್ ಫಿಲ್ ಮಾಡಲು ಯೋಜಿಸಲಾಗಿರುತ್ತದೆ.<br>• 218 ನಗರಸ್ಥಳೀಯ ಸಂಸ್ಥೆಗಳ ಯೋಜನಾವರದಿಯಲ್ಲಿ ಪ್ರಸ್ತಾಪಿಸಿರುವಂತೆ 2416 ಕಾಮಗಾರಿಗಳು ಮಂಜೂರಾಗಿದ್ದು, 1801 ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದೆ ಹಾಗು 206 ಕಾಮಗಾರಿಗಳು ಮುಕ್ತಾಯಗೊಂಡಿರುತ್ತವೆ. 3504 ವಾಹನ ಯಂತ್ರೋಪಕರಣಗಳ ಪೈಕಿ 629ಡ ಟೆಂಡರ್ ಕರೆಯಲಾಗಿದೆ ಹಾಗು 205 ವಾಹನ ಯಂತ್ರೋಪಕರಣಗಳನ್ನು ಖರೀದಿಸಲಾಗಿದೆ. ಜಿಲ್ಲಾವಾರು ವಿವರ ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಇ) | ಈ ರೀತಿ ಸಂಗ್ರಹವಾಗುವ ತ್ಯಾಜ್ಯವನ್ನು ಭೂಮಿಗೆ ಹಾಕಬಾರದೆಂದು 2005 ರಲ್ಲಿ ನಿಯಮ ರೂಪಿಸಿದ್ದರೂ ಇದನ್ನು ಲೆಕ್ಕಿಸದೆ ಕಸವನ್ನು ಗುಂಡಿಗೆ ಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಇದನ್ನು ನಿಲ್ಲಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | • ಕೇಂದ್ರ ಸರ್ಕಾರವು ಜಾರಿಗೆ ತಂದಿರುವ ಘನತ್ಯಾಜ್ಯ ನಿರ್ವಹಣೆ ನಿಯಮಗಳು 2016 ರೀತ್ಯಾ ನಗರಸ್ಥಳೀಯ ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಉತ್ಪಾದನೆಯಾಗುವ ಘನತ್ಯಾಜ್ಯ ವಸ್ತುಗಳನ್ನು ಸಂಸ್ಕರಿಸಿದ ನಂತರ ಉಳಿಯುವ ನಿಸ್ಸತ್ವ ತ್ಯಾಜ್ಯವನ್ನು ಮಾತ್ರ ವೈಜ್ಞಾನಿಕವಾಗಿ ನೆಲಭರ್ತಿ ಮಾಡಬೇಕಿರುತ್ತದೆ.<br>• ಆದರೆ ಕೆಲವು ನಗರಗಳಲ್ಲಿ ತ್ಯಾಜ್ಯ ಸಂಸ್ಕರಣೆ ಘಟಕದ ಸಾಮರ್ಥ್ಯ ಕಡಿಮೆಯಿರುವುದರಿಂದ ಸ್ಥಾಪಿತ ಸಾಮರ್ಥ್ಯದಿಂದ ಎಷ್ಟು ಸಾಧ್ಯವೋ ಅಷ್ಟು ತ್ಯಾಜ್ಯವನ್ನು ಸಂಸ್ಕರಿಸಿ ಉಳಿಕೆ ತ್ಯಾಜ್ಯವನ್ನು ತೆರೆದ ಪ್ರದೇಶದಲ್ಲಿ ತ್ಯಾಜ್ಯ ವಿಲೇವಾರಿ ಮಾಡುತ್ತಿರುವುದು ಗಮನಕ್ಕೆ ಬಂದಿರುತ್ತದೆ.<br>• ಇದನ್ನು ತಡೆಗಟ್ಟುವ ಸಲುವಾಗಿ ಎಸ್.ಬಿ.ಎಂ ಯೋಜನೆಯಡಿ ನಗರ ಸ್ಥಳೀಯ ಸಂಸ್ಥೆಗಳು ಮುಂದಿನ 5 ವರ್ಷಗಳಲ್ಲಿ ಉತ್ಪತಿ ಮಾಡಬಹುದಾದಂತಹ ತ್ಯಾಜ್ಯವನ್ನು ಅಂದಾಜಿಸಿದ ನಂತರ ಹಾಲಿ ನಗರ/ಪಟ್ಟಣಗಳಲ್ಲಿ ಲಭ್ಯವಿರುವ ಸಂಸ್ಕರಣಾ ಸೌಲಭ್ಯದ ಸಾಮರ್ಥ್ಯವನ್ನು ಪರಿಗಣಿಸಿ, ನೂರು ಪ್ರತಿಶತ ತ್ಯಾಜ್ಯ ಸಂಸ್ಕರಣೆ ಹಾಗೂ ವಿಲೇವಾರಿಗೆ ಅಗತ್ಯವಿರುವ ಹೆಚ್ಚುವರಿ ಸಾಮರ್ಥ್ಯದ ತ್ಯಾಜ್ಯ ಸಂಸ್ಕರಣಾ ಹಾಗೂ ವಿಲೇವಾರಿ ಸೌಲಭ್ಯವನ್ನು ಡಿ.ಪಿ.ಆರ್‌ಗಳಲ್ಲಿ ವಿನ್ಯಾಸಿಸಲಾಗಿರುತ್ತದೆ.<br>• ಅದರಂತೆ ನಗರ ಸ್ಥಳೀಯ ಸಂಸ್ಥೆಗಳು ವೈಜ್ಞಾನಿಕ ತ್ಯಾಜ್ಯ ಸಂಸ್ಕರಣೆ ಹಾಗೂ ನೆಲಭರ್ತಿ ಸೌಲಭ್ಯವನ್ನು ಅಭಿವೃದ್ಧಿ ಪಡಿಸಿ, ಕೇವಲ ನಿಸ್ಸತ್ವ ತ್ಯಾಜ್ಯವನ್ನು ಮಾತ್ರ ವೈಜ್ಞಾನಿಕವಾಗಿ ನೆಲಭರ್ತಿ ಮಾಡಲು ಸೂಚನೆ ನೀಡಲಾಗಿದೆ. |

ಸಂಖ್ಯೆ: ನಅಇ 81 ಸಿಎಸ್‌ಎಸ್ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.

ANNEXURE-1

| SL no | District | No of ULB's | SWM DPR Implementation(Civil Components) | | SWM DPR Implementation(Vehicle and Machinery Procurement) | | |
|---|---|---|---|---|---|---|---|
| | | | Total No works | Tender called | Total No works(Vehicle and Machinery | Tender called | No of Vehicles/machineries procured |
| 1 | Koppal | 9 | 72 | 72 | 22 | 0 | 0 |
| 2 | Bidar | 7 | 96 | No | 183 | - | - |
| 3 | Bangalore Urban | 6 | 21 | 0 | 38 | 0 | 0 |
| 4 | Belgaum | 33 | 142 | 131 | 330 | 3 | 8 |
| 5 | Bellary | 16 | 141 | 10 | 893 | 28 | 0 |
| 6 | Hubli-Dharwad | 6 | 60 | 60 | 43 | 27 | 62 |
| 7 | Bijapur | 13 | 55 | 52 | 50 | 50 | 23 |
| 8 | Uttara Kannada | 12 | 118 | 88 | 69 | 43 | 1 |
| 9 | Yadgir | 7 | 47 | 47 | 43 | 43 | 0 |
| 10 | Bagalkot | 15 | 76 | 69 | 119 | 2 | 2 |
| 11 | Kodagu | 4 | 59 | 36 | 60 | 1 | 1 |
| 12 | Kolar | 6 | 114 | 73 | 48 | 11 | 3 |
| 13 | Chitradurga | 7 | 86 | 86 | 69 | 69 | 0 |
| 14 | Bangalore Rural | 5 | 37 | 8 | 58 | 14 | 24 |
| 15 | Chamarajanagar | 5 | 72 | 49 | 31 | 0 | 0 |
| 16 | Gulbarga | 10 | 92 | 87 | 86 | 0 | 0 |
| 17 | Chikkaballapura | 6 | 70 | 61 | 69 | 52 | 40 |
| 18 | Tumkur | 11 | 80 | 65 | 35 | 7 | 12 |
| 19 | Shimoga | 9 | 116 | 103 | 285 | 25 | 5 |
| 20 | Haveri | 9 | 117 | 102 | 73 | 63 | 7 |
| 21 | Mysore | 9 | 63 | 55 | 131 | 21 | 2 |
| 22 | Mandya | 8 | 149 | 128 | 42 | 42 | 0 |
| 23 | Raichur | 13 | 57 | 46 | 296 | 0 | 0 |
| 24 | Gadag-Betigeri | 9 | 129 | 129 | 84 | Yes | - |
| 25 | Hassan | 8 | 26 | 21 | 48 | 12 | 1 |
| 26 | Dakshin Kannada | 10 | 44 | 43 | 148 | 74 | 6 |
| 27 | Ramanagara | 5 | 89 | 36 | 70 | 12 | 7 |
| 28 | Davanagere | 6 | 44 | 30 | 29 | 0 | 0 |
| 29 | Chikmagalur | 9 | 73 | 60 | 52 | 22 | 0 |
| 30 | Udupi | 5 | 71 | 54 | 350 | 8 | 1 |
| **Total** | | **278** | **2416** | **1801** | **3504** | **629** | **205** |